



# ಅಭ್ಯುದಯ

ಸಾಮಾಜಿಕವಾಗಿ ಅವಕಾಶ ವಂಚಿತ ವಿದ್ಯಾರ್ಥಿಗಳ ಶೈಕ್ಷಣಿಕ ವಿಕಾಸಕ್ಕಾಗಿ ವಿವಿಧ ನೆರವು ನೀಡಿ, ಅವರ ಪ್ರೌಢಶಾಲಾ ಹಾಗೂ ನಂತರದ ಉನ್ನತ ವಿದ್ಯಾಭ್ಯಾಸಕ್ಕಾಗಿ ಸಹಾಯಹಸ್ತ ನೀಡುವ ಸೇವಾ ಸಂಸ್ಥೆ 'ಅಭ್ಯುದಯ'.

1963ರಲ್ಲಿ ಪ್ರಾರಂಭಗೊಂಡ ಕೇಶವಕೃಪಾ ಸಂವರ್ಧನ ಸಮಿತಿ ಟ್ರಸ್ಟ್‌ನ ವತಿಯಿಂದ ನಡೆಸಲ್ಪಡುವ ಶೈಕ್ಷಣಿಕ ಸೇವಾ ಯೋಜನೆಯಾಗಿರುವ 'ಅಭ್ಯುದಯ', ಸಾಮಾಜಿಕವಾಗಿ ಅವಕಾಶವಂಚಿತ ವಿದ್ಯಾರ್ಥಿಗಳಿಗೆ ಭರವಸೆಯ ಹೊಂಗಿರಣ.





**ರಾಜೇಶ್ ಪದ್ಮಾರ್**
ಟ್ರಸ್ಟಿ, ಸಮರ್ಥ ಭಾರತ

2004ರಲ್ಲಿ 12 ವಿದ್ಯಾರ್ಥಿಗಳೊಂದಿಗೆ ಪ್ರಾರಂಭಗೊಂಡ ಅಭ್ಯುದಯ ಸಂಸ್ಥೆಯ ಉಚಿತ ಕಲಿಕಾ ಕೇಂದ್ರ (Free Learning Centre)ಗಳಲ್ಲಿ ಇಂದು 32,000ಕ್ಕೂ ಹೆಚ್ಚು ವಿದ್ಯಾರ್ಥಿಗಳು ಓದಿ ತಮ್ಮ ಯಶಸ್ವೀ ಬದುಕಿನ ಕನಸುಗಳನ್ನು ಬೆನ್ನಟ್ಟಿದ್ದಾರೆ. ಬೆಂಗಳೂರಿನ ಅನೇಕ ಸೇವಾ ಬಸ್ತಿಗಳಲ್ಲಿ (ಸ್ಲಂ) ಹಾಗೂ ಗ್ರಾಮಾಂತರ ಪ್ರದೇಶಗಳಲ್ಲಿ 128ಕ್ಕೂ ಹೆಚ್ಚು ಕಲಿಕಾ ಕೇಂದ್ರಗಳನ್ನು ಹೊಂದಿವೆ.

**ದೃಷ್ಟಿ - ಧ್ಯೇಯ:** ಶಿಕ್ಷಣವು ಮನುಷ್ಯನ ಮೂಲಭೂತ ಹಕ್ಕುಗಳಲ್ಲೊಂದು, ಆದರೆ ಸಮಾಜದಲ್ಲಿ ಇಂದಿಗೂ ಶಿಕ್ಷಣದಿಂದ ವಂಚಿತರಾಗುತ್ತಿರುವ ಮಕ್ಕಳಿದ್ದಾರೆ. ಅಂತಹ ಅವಕಾಶವಂಚಿತ ವಿದ್ಯಾರ್ಥಿಗಳಲ್ಲಿನ ಶೈಕ್ಷಣಿಕ ಅಗತ್ಯಗಳನ್ನು ಗುರುತಿಸಿ, ಆ ಮಕ್ಕಳ ಶಿಕ್ಷಣಕ್ಕಾಗಿ ನೆರವು ನೀಡುವುದು ಅಭ್ಯುದಯ ಸಂಸ್ಥೆಯ ಧ್ಯೇಯ. ಆ ಮೂಲಕ ಅಂತಹ ಮಕ್ಕಳಲ್ಲಿ ಓದುವ ಉತ್ಸಾಹ ಮತ್ತು ಕಲಿಕೆಯ ವಾತಾವರಣ ಮೂಡಿಸಿ ಪ್ರೌಢಶಾಲಾ (ಎಸ್‌ಎಸ್‌ಎಲ್‌ಸಿ) ಹಂತವನ್ನು ಯಶಸ್ವಿಯಾಗಿ ದಾಟಿಸುವುದು ಮುಖ್ಯ ಗುರಿ ನಂತರ ಅವರ ಉನ್ನತ ವಿದ್ಯಾಭ್ಯಾಸಕ್ಕಾಗಿ ನೆರವು. ಇದರ ಮೂಲಕ ಶಿಕ್ಷಣದಿಂದ ವಂಚಿತರಾಗಲಿದ್ದ ಸಾವಿರಾರು ವಿದ್ಯಾರ್ಥಿಗಳಿಗೆ ಉನ್ನತ ವಿದ್ಯಾಭ್ಯಾಸದ ಬಾಗಿಲು ತೆರೆದಿದೆ. ಆರ್ಥಿಕ ಬಡತನ ಮತ್ತು ಇತರೆ ಕಾರಣಗಳಿಗಾಗಿ ವೈದ್ಯಕೀಯ, ಇಂಜಿನಿಯರಿಂಗ್, ಇತ್ಯಾದಿ ಉನ್ನತ ಶಿಕ್ಷಣವನ್ನು ಊಹಿಸಲು ಸಾಧ್ಯವಿಲ್ಲದ ಕುಟುಂಬದ ವಿದ್ಯಾರ್ಥಿಗಳಿಗೆ ಆಸರೆಯಾಗಿರುವ 'ಅಭ್ಯುದಯ' ಸಂಸ್ಥೆಯ ಆಶ್ರಯದಲ್ಲಿ ಓದಿದ ಈ ರೀತಿಯ ಅನೇಕ ವಿದ್ಯಾರ್ಥಿಗಳು ಇಂದು ಯಶಸ್ವಿಯಾಗಿ ಎಂಬಿಎ, ವೈದ್ಯಕೀಯ, ಇಂಜಿನಿಯರಿಂಗ್, ಸ್ನಾತಕೋತ್ತರ ಇತ್ಯಾದಿ ವ್ಯಾಸಂಗವನ್ನು ಪೂರ್ಯೆಸಿದ್ದಾರೆ.

**ಸಾಮಾಜಿಕ ಪರಿಣಾಮ:**

- ಕಲಿಕಾ ಕೇಂದ್ರಗಳ ಸುತ್ತಮುತ್ತಲಿನ ನೂರಾರು ಸರ್ಕಾರಿ ಶಾಲೆಗಳಲ್ಲಿ ವಿದ್ಯಾರ್ಥಿಗಳ ಹಾಜರಾತಿ, ವಾರ್ಷಿಕ ಫಲಿತಾಂಶ ಗಣನೀಯವಾಗಿ ಹೆಚ್ಚಳವಾಗಿದೆ.
- ಶಾಲಾ-ಕಾಲೇಜು ಹಂತಗಳಲ್ಲಿ ಶಿಕ್ಷಣವನ್ನು ಇದ್ದಕ್ಕಿದ್ದಂತೆ ಮೊಟಕುಗೊಳಿಸುತ್ತಿದ್ದ (Dropouts) ವಿದ್ಯಾರ್ಥಿಗಳ ಪ್ರಮಾಣ ಗಣನೀಯವಾಗಿ ಇಳಿಕೆಯಾಗಿದೆ.
- ಅಭ್ಯುದಯ ಸಂಸ್ಥೆಯಲ್ಲಿ ವಿದ್ಯಾರ್ಥಿಗಳಿಗೆ ಸಿಗುವ ಮೌಲ್ಯಾಧಾರಿತ ಶಿಕ್ಷಣದ ಪ್ರೇರಣೆಯಿಂದ ಅನೇಕ ಮಕ್ಕಳ ಮನೆಯ ಹಿರಿಯರಲ್ಲಿದ್ದ ಕುಡಿತದ ಚಟ, ಕೌಟುಂಬಿಕ-ಜಗಳಗಳು, ಬಹುಮಟ್ಟಿಗೆ ಕಡಿಮೆಯಾಗಿದೆ. ಹೀಗೆ, ನೂರಾರು ಕುಟುಂಬಗಳಲ್ಲಿ ಸದ್ದಿಲ್ಲದೆ ಧನಾತ್ಮಕ, ಸಾಮಾಜಿಕ ಪರಿವರ್ತನೆಯನ್ನು ಅಭ್ಯುದಯದ ಸ್ವಯಂಸೇವಕರು ಮಾಡುತ್ತಿದ್ದಾರೆ.

●ಅಭ್ಯುದಯದ ಶೈಕ್ಷಣಿಕ ಯೋಜನೆಗಳ ಮೂಲಕ ಉನ್ನತ ವಿದ್ಯಾಭ್ಯಾಸವನ್ನು ಯಶಸ್ವಿಯಾಗಿ ಪೂರೈಸಿದ ಅನೇಕ ಹಿರಿಯ ವಿದ್ಯಾರ್ಥಿಗಳು ಇದೀಗ ಸ್ವಯಂಸೇವಕ(Volunteers) ರಾಗಿ ಅಭ್ಯುದಯದ ವಿವಿಧ ಚಟುವಟಿಕೆಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ.

●ಸ್ಲಂಗಳಲ್ಲಿ ಸ್ವಚ್ಛತೆ, ಆರೋಗ್ಯಪೂರ್ಣ ಜೀವನಶೈಲಿಗೆ ಒತ್ತು ನೀಡುವ ಕಾರ್ಯಚಟುವಟಿಕೆಗಳನ್ನು ಅಭ್ಯುದಯದ ವಿದ್ಯಾರ್ಥಿಗಳೇ ಆಯೋಜಿಸಿದ್ದು ಅತ್ಯಂತ ಪ್ರಭಾವೀ ಪರಿಣಾಮವನ್ನುಂಟುಮಾಡಿದೆ.

●ಸಮಾಜದ ಅತ್ಯಂತ ಅವಕಾಶ ವಂಚಿತ ವರ್ಗದ ಮನೆಗಳ ಮಕ್ಕಳು ಅಭ್ಯುದಯದ ಶೈಕ್ಷಣಿಕ ಯೋಜನೆಯ ಮೂಲಕ ಶಿಕ್ಷಣ ಪೂರೈಸಿ ಬ್ಯಾಂಕ್ ಅಧಿಕಾರಿಗಳಾಗಿ, ರಾಜ್ಯ ಸರಕಾರದ ಆಡಳಿತಾಧಿಕಾರಿಗಳಾಗಿ, ಪ್ರಮುಖ ಕಂಪೆನಿ-ಸಂಸ್ಥೆಗಳಲ್ಲಿ ಉದ್ಯೋಗಿಗಳಾಗಿದ್ದಾರೆ.

**ಕಾರ್ಯಚಟುವಟಿಕೆಗಳು:** ಕಲಿಕಾ ಕೇಂದ್ರಗಳು (Free Learning Centres): 128ಕ್ಕೂ ಹೆಚ್ಚು ಕಲಿಕಾ ಕೇಂದ್ರಗಳಲ್ಲಿ ಆರ್ಥಿಕವಾಗಿ ಹಿಂದುಳಿದ, ಅವಕಾಶವಂಚಿತ ವಿದ್ಯಾರ್ಥಿಗಳಿಗೆ ಎಸ್‌ಎಸ್‌ಎಲ್‌ಸಿ ಪರೀಕ್ಷೆಗೆ ತರಬೇತಿ ತರಗತಿಗಳನ್ನು ನಡೆಸಲಾಗುತ್ತದೆ. 32,000ಕ್ಕೂ ಹೆಚ್ಚು ವಿದ್ಯಾರ್ಥಿಗಳು ಈ ಯೋಜನೆಯಲ್ಲಿ ಓದಿದ್ದು ತಮ್ಮ ಉನ್ನತ ಶಿಕ್ಷಣದ ಮೆಟ್ಟಿಲುಗಳನ್ನು ಯಶಸ್ವಿಯಾಗಿ ಏರಿದ್ದಾರೆ.

ಜೂನ್-ಅಕ್ಟೋಬರ್ ತಿಂಗಳಲ್ಲಿ ಪ್ರತಿ ವಿಷಯದಲ್ಲಿ ಪ್ರಾಥಮಿಕ ಫೌಂಡೇಶನ್ ಕೋರ್ಸ್‌ಗಳು, ನವೆಂಬರ್‌ನಿಂದ ಫೆಬ್ರವರಿ ತನಕ ಎಸ್ ಎಸ್‌ಎಲ್‌ಸಿ ಕ್ರ್ಯಾಶ್ ಕೋರ್ಸ್ ಕೋಚಿಂಗ್ ಕ್ಲಾಸ್‌ಗಳು, ಫೆಬ್ರವರಿ ತಿಂಗಳಲ್ಲಿ ಪರೀಕ್ಷಾ ತಯಾರಿಯ ತರಗತಿಗಳು, ಮೇ-ಜೂನ್ ತಿಂಗಳಲ್ಲಿ ಪೂರಕ ಪರೀಕ್ಷೆಗೆ ತಯಾರಿ ತರಗತಿಗಳು ನಡೆಯುತ್ತವೆ.

**ವಿದ್ಯಾನಿಧಿ:** ವಿದ್ಯಾರ್ಥಿಗಳ ಶೈಕ್ಷಣಿಕ ಅಗತ್ಯಗಳಿಗೆ ಅನುಗುಣವಾಗಿ-ಆರ್ಥಿಕ ಉತ್ತೇಜನ ನೀಡುವ 'ವಿದ್ಯಾನಿಧಿ' ಯೋಜನೆಯ ಮೂಲಕ ಪ್ರತಿ ವರ್ಷವೂ ಸಾವಿರಾರು ವಿದ್ಯಾರ್ಥಿಗಳಿಗೆ ನೆರವು ನೀಡಲಾಗುತ್ತಿದೆ. ಇದಕ್ಕಾಗಿ ಅರ್ಜಿಗಳನ್ನು ಆಹ್ವಾನಿಸಿ, ಆಯ್ದ ವಿದ್ಯಾರ್ಥಿಗಳಿಗೆ ಸೂಕ್ತ ಮೊತ್ತದ ಆರ್ಥಿಕ ನೆರವು ನೀಡಲಾಗುತ್ತಿದ್ದು ಸಾವಿರಾರು ವಿದ್ಯಾರ್ಥಿಗಳಿಗೆ ಶಿಕ್ಷಣದ ಹಾದಿ ಸುಗಮಗೊಳಿಸಿದೆ.

**ಚೇತನಾ:** ಕಲಿಕೆ ಮೊಟಕುಗೊಳಿಸಿದ್ದ, ಶಾಲೆಗೆ ಹಾಜರಾಗದ (Dropouts) ವಿದ್ಯಾರ್ಥಿಗಳಿಗೆ ವಿಶೇಷ ಕೋಚಿಂಗ್ ವ್ಯವಸ್ಥೆ.

**ನಮ್ಮ ಶಾಲೆ:** ಗ್ರಾಮೀಣ ಪ್ರದೇಶದ ಸರ್ಕಾರಿ ಶಾಲೆಗಳನ್ನು ದತ್ತು ತೆಗೆದುಕೊಂಡು ಅಲ್ಲಿ ಮೂಲಭೂತ ಸೌಲಭ್ಯಗಳನ್ನು ಒದಗಿಸುವ ವಿಶಿಷ್ಟ ಯೋಜನೆ.

**ಆರೋಹಣ:** ವಿಜ್ಞಾನ-ಸಾಂಸ್ಕೃತಿಕ ಚಟುವಟಕೆ, ಸ್ಪರ್ಧೆಗಳು ಸೇರಿದಂತೆ ವಾರ್ಷಿಕ ಕಾರ್ಯಕ್ರಮ.

**ರುಧಿರ:** ಉಚಿತ ವೈದ್ಯಕೀಯ ತಪಾಸಣಾ ಶಿಬಿರಗಳು ಹಾಗೂ ರಕ್ತದಾನ ಶಿಬಿರ ಕಾರ್ಯಕ್ರಮಗಳು.






**ಪರಿವರ್ತನ:** ಡ್ರಗ್ಸ್ ಸೇವನೆ, ಮದ್ಯಪಾನ, ಹಿಂಸಾತ್ಮಕ ಮನೋವೃತ್ತಿ, ಕಳ್ಳತನದ ಪ್ರವೃತ್ತಿ, ಕ್ಷುಲ್ಲಕ ಕಾರಣಗಳಿಗೆ ಜಗಳದ ಸ್ವಭಾವ ಇತ್ಯಾದಿಗಳನ್ನು ಬದಲಾಯಿಸಿ, ಪ್ರೀತಿ-ಸ್ನೇಹ, ಗೌರವಯುತ, ಶಿಸ್ತಿನ ಬದುಕು ಸಾಗಿಸಲು ಪ್ರೇರಣೆ ನೀಡುವ ಯೋಜನೆ.

**ಸೇವಾ:** ಕಾಲೇಜು ವಿದ್ಯಾರ್ಥಿಗಳಿಗಾಗಿ ಸೇವಾ ಚಟುವಟಿಕೆಗಳಲ್ಲಿ ಸ್ವಯಂಸೇವಕ (volunteer)ರಾಗಿ ಭಾಗವಹಿಸುವ ಅವಕಾಶದ ಜತೆಗೆ ಇಂಟರ್ನ್‌ಶಿಪ್ ಯೋಜನೆ.

**ಇತರೆ ಯೋಜನೆಗಳು:** ವೇದಗಣಿತ, ಸಂಸ್ಕೃತ ಸಂಭಾಷಣಾ ಶಿಬಿರಗಳು, ಸಂಗೀತ ತರಬೇತಿ, ಖಿಕಖಇ ಸ್ಪರ್ಧಾತ್ಮಕ ಪರೀಕ್ಷೆಗಳಿಗೆ ತರಬೇತಿ ಕಾರ್ಯಾಗಾರಗಳು, ಬ್ಯಾಂಕ್ ಪರೀಕ್ಷೆಗೆ ತರಬೇತಿ, ಜೀವನೋಪಾಯ ವೃತ್ತಿ ತರಬೇತಿಗಳು, ಇತ್ಯಾದಿಗಳನ್ನು ನಿಯಮಿತವಾಗಿ ಆಯೋಜಿಸಲಾಗುತ್ತಿದೆ.

**ಕೋವಿಡ್ ಸೇವಾಕಾರ್ಯ:** ಕರೋನಾ ಎರಡನೇ ಅಲೆಯ ಸಂದರ್ಭದಲ್ಲಿ 13 ಆಸ್ಪತ್ರೆಗಳಲ್ಲಿ ಹೆಚ್ಚುವರಿ ವೈದ್ಯರು-ದಾದಿಯರನ್ನು ನಿಯೋಜಿಸುವುದರ ಜತೆಗೆ ದೊಡ್ಡ ಪ್ರಮಾಣದಲ್ಲಿ ಔಷಧಿಗಳು, ಮೆಡಿಕಲ್ ಕಿಟ್, ಆಕ್ಸಿಜನ್ ಕಾನ್ಸಂಟ್ರೇಟರ್ಸ್ ಮಷೀನ್‌ಗಳನ್ನು ಪೂರೈಸಲಾಗಿದೆ. ಕೋವಿಡ್‌ನಿಂದ ಮೃತರಾದ ಕುಟುಂಬಗಳಿಗೆ ಜೀವನಾಧಾರದ ಸೇವಾಯೋಜನೆ ಕೈಗೊಳ್ಳಲಾಗಿದೆ. ಜಮ್ಮು-ಕಾಶ್ಮೀರ, ಲೇಹ್, ಲಡಾಖ್, ಸಿಕ್ಕಿಂ, ಭುಜ್, ಕಛ್ ಸೇರಿದಂತೆ ಭಾರತದ ವಿವಿಧ ಗ್ರಾಮೀಣ ಪ್ರದೇಶಗಳಲ್ಲಿ ವೈದ್ಯಕೀಯ ಹಾಗೂ ಶೈಕ್ಷಣಿಕ ಸೇವಾ ಯೋಜನೆಗಳನ್ನು ಮಾಡಲಾಗಿದೆ.

**ಗಣ್ಯರ ಭೇಟಿ:** ಅಭ್ಯುದಯ ಸಂಸ್ಥೆಯ ಶೈಕ್ಷಣಿಕ ಸೇವಾ ಕರ್ಯಗಳನ್ನು ಮೆಚ್ಚಿ ಶಿಕ್ಷಣ ಸಚಿವರಾದ ಎಸ್ ಸುರೇಶ್ ಕುಮಾರ್, ಪೊಲೀಸ್ ಅಧಿಕಾರಿ ಭಾಸ್ಕರ್ ರಾವ್, ನಟ ಜಗ್ಗೇಶ್ ಸೇರಿದಂತೆ ಅನೇಕ ಅಧಿಕಾರಿಗಳು, ಗಣ್ಯರು ಸಂಸ್ಥೆಗೆ ಭೇಟಿ ನೀಡಿದ್ದಾರೆ.

**ವಿಳಾಸ: 'ಅಭ್ಯುದಯ, ಜ್ಞಾನಗಿರಿ', 4ನೇ ಅಡ್ಡರಸ್ತೆ,**
**2ನೇ ಮುಖ್ಯರಸ್ತೆ, ಸೌದಾಮಿನಿ ಲೇಔಟ್, ಕೋಣನಕುಂಟೆ,**
**ಜೆ ಪಿ ನಗರ, ಬೆಂಗಳೂರು-62**
**ದೂರವಾಣಿ: 9880784082, 9844135044**

